ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಕೊಡಗು ಜಿಲ್ಲೆಯಲ್ಲಿ ಕಳೆದ ವರ್ಷ ಪ್ರಕೃತಿ ವಿಕೋಪದಲ್ಲಿ ಭೂಮಿ ಕಳೆದುಕೊಂಡವರಿಗೆ ನೀಡಿರುವ ಪರಿಹಾರದ ಕುರಿತು

ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) -

45 (327) ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕೊಡಗು ಜಿಲ್ಲೆಯಲ್ಲಿ ಕಳೆದ ವರ್ಷ ಸಂಭವಿಸಿರುವ ಪ್ರಕೃತಿ ವಿಕೋಪದಲ್ಲಿ ಭೂಮಿ ಕಳೆದುಕೊಂಡ/ವ್ಯವಸಾಯ ಮಾಡಲು ಸಾಧ್ಯವಿಲ್ಲದಂತೆ ಪರಿವರ್ತನೆಗೊಂಡಿರುವ ಭೂಮಿಗಳಿಗೆ ಯಾವ ರೀತಿಯಲ್ಲಿ ಪರಿಹಾರ ನೀಡಲಾಗಿದೆ; ಸದರಿ ವಿಷಯದಲ್ಲಿ ಅಳವಡಿಸಿಕೊಂಡಿರುವ/ರೂಪಿಸಿರುವ ನಿಯಮಗಳು ಹಾಗೂ ಮಾನದಂಡಗಳೇನು ;

(ಆ) ಈ ರೀತಿ ಒಟ್ಟು ಎಷ್ಟು ಪ್ರಕರಣಗಳಲ್ಲಿ ಪರಿಹಾರ ಕೋರಿ ಅರ್ಜಿಗಳು ಬಂದಿವೆ ;

(ಇ) ಇದುವರೆವಿಗೂ ಈ ಪ್ರಕರಣಗಳಲ್ಲಿ ಪರಿಹಾರ ಹಣ ಸಂದಾಯವಾಗಿದೆಯೇ; ಸಂದಾಯವಾಗದಿದ್ದಲ್ಲಿ, ಒಟ್ಟು ಎಷ್ಟು ಮೊತ್ತ ಸಂದಾಯವಾಗಿದೆ ; ಸಂದಾಯಕ್ಕೆ ಬಾಕಿ ಇರುವ ಪ್ರಕರಣಗಳ ಸಂಖ್ಯೆ ಹಾಗೂ ಮೊತ್ತ ಎಷ್ಟು ?